ನವಸಾಕ್ಷರ ಪುಸ್ತಕ ಮಾಲೆ ೬೧

# ಭೂತಾರಾಧನೆ

ಕೆ. ಕೆ. ಮಾಧವ








ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಲೆ

ಯ

ಎಸ್.

ಾಲಯ

ು

ಲೋಕಶಿಕ್ಷಣ ನಿರ್ದೇಶನಾಲಯ

ನವಸಾಕ್ಷರ ಪುಸ್ತಕ ಮಾಲೆ - ೬೧

# ಭೂತಾರಾಧನೆ



ಕೆ. ಕೆ. ಮಾಧವ





ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ-೫೮೩ ೨೧೧

BHOOTARADHANE : By K. K. Madhava. Published by The Director of Prasaranga, Kannada University, Hampi - 583 211, KARNATAKA.
First Impression 1994, Pp. i i + 26, Rs. 8.00.

---





**ಸಂಯೋಜನಾಧಿಕಾರಿ**
ಎಚ್. ಎಸ್. ಶ್ರೀಮತಿ
ಪಠ್ಯ ಪುಸ್ತಕ ರಚನಾ ವಿಭಾಗ

**ಪ್ರಕಾಶಕರು**
**ನಿರ್ದೇಶಕರು**
**ಪ್ರಸಾರಾಂಗ**
**ಕನ್ನಡ ವಿಶ್ವವಿದ್ಯಾಲಯ**
**ಹಂಪಿ - ೫೮೩ ೨೧೧**

**ಮುಖಪುಟ ವಿನ್ಯಾಸ**
ಕೆ. ಮಕಾಳಿ

**ಬೆಲೆ : ರೂ. ೮.೦೦**

ಮುದ್ರಕರು
ಬೃಂದಾವನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಪ್ರೈ.ಲಿ.
೧೨/೧೩, ಲಾಲ್‌ಬಾಗ್ ಫೋರ್ಟ್ ರಸ್ತೆ,
ಬೆಂಗಳೂರು – ೫೬೦ ೦೦೪.

# ಭೂತಾರಾಧನೆ

"ಅಜ್ಜಿ ಹಾಡು ಹೇಳಜ್ಜಿ" ಮೊಮ್ಮಗ ಒತ್ತಾಯ ಮಾಡಿದ.

"ಯಾವ ಹಾಡು?" ಮೊಮ್ಮಗನ ಒತ್ತಾಯ ತಡೆಯದೆ ಅವರು ಕೇಳಿದರು.

"ಯಾವುದಾದರೂ 'ಸಂದಿ' ಹೇಳು" ಮಗನ ಉತ್ತರ.

"ಸಂದಿ ಭೂತಕ್ಕೆ" ಅಜ್ಜಿ ನಕ್ಕರು.

"ಭೂತದ ಸಂದಿಯೇ ಹೇಳು" ಮಗ ತಾಕೀತು ಮಾಡಿದ.

"ಯಾವ ಸಂದಿ ಹೇಳಲಿ?"

"ಯಾವುದೂ ಆದೀತು."

"ಹಾಗಾದರೆ ಹೇಳುತ್ತೇನೆ, ಕೇಳು."

"ಹೂಂ"

" ಓ ಡೆನ್ನ ಡೆನ್ನಾನ
ಡೆನ್ನಾನ ಡೆನ್ನಾನ
ಓ ಡೆನ್ನ ಡೆನ್ನಾನ
ಡೆನ್ನಾನ ಡೆನ್ನಾನ"



**ಅಜ್ಜಿ ಮೊಮ್ಮಗನಿಗೆ ಕಥೆ ಹೇಳುತ್ತಿದ್ದಾಳೆ**

ಹೀಗೆ ಕತೆ ಸಾಗಿತು. ಆ ಮನೆಯಲ್ಲಿ ಇದು ನಿತ್ಯವೂ ನಡೆಯುವುದು. ಮೊಮ್ಮಗ ಶಾಲೆ ಕಲಿಯುವ ಹುಡುಗ. ಶಾಲೆ ಬಿಟ್ಟು ಆಟ ಆಡುವ. ಆಟ ಆಡಿ ದಣಿದು ಮನೆಗೆ ಬರುವ. ಆಗ ಅಜ್ಜಿ ಹಾಡಬೇಕು. ಇಲ್ಲಿ ತನಕ ಅಜ್ಜಿ ತುಂಬ ಹಾಡಿದ್ದಾರೆ. ಅಂಗಾರ, ಗುಳಿಗ, ಜುಮಾದಿ, ಲೆಕ್ಕೆಸಿರಿ, ಸಿರಿದೇವಿ ಕತೆ, ಅಬ್ಬಗೆ-ದಾರಗೆ, ಕೋಟಿ-ಚೆನ್ನಯರ ಕತೆಯೂ ಆಗಿದೆ. ಈಗ ಹೇಳುವುದು ಕಲುರುಟಿ ಭೂತದ'ಸಂದಿ'. ಬರಿ ಹಾಡಿದರೆ ಹುಡುಗನಿಗೆ ಕತೆ ತಿಳಿಯದು. ಅದಕ್ಕೆ ಹಾಡುತ್ತ ಕತೆಯೂ ಹೇಳುತ್ತಾರೆ. ಕತೆ ಹೀಗೆ ಸುರು ಆಯಿತು.

ಕೆಲ್ಲೆತ ಮಾರನಾಡು ಎಂಬುದು ಒಂದು ಊರು. ಅಲ್ಲಿ ಒಂದು ಗಂಡ-ಹೆಂಡಿರ ಸಂಸಾರ. ಗಂಡನ ಹೆಸರು ಸಮ್ಮು, ಕೆಲವು ಕಡೆ ಶಂಭು ಅಂತಲೂ ಹೇಳುವರು.

ತಾಯಿ ಇರುವದಿ. ಅವರಿಗೆ ಐದು ಜನ ಗಂಡು ಮಕ್ಕಳು. ಎಲ್ಲಣ್ಣ, ಮಲ್ಲಣ್ಣ ಬೀರು, ಬಿಕ್ಕರು, ನಂದು. ಆರನೆಯ ಮಗು ಹೆಣ್ಣು, ಅವಳ ಹೆಸರು ಕಲುರುಟಿ. ನಂದು-ಕಲುರುಟಿ ಅವಳಿ ಜವಳಿ ಮಕ್ಕಳು.

"ಅವಳಿ ಜವಳಿ ಎಂದರೇನು?" ಹುಡುಗ ಕೇಳಿದ.

"ಒಟ್ಟಿಗೆ ಹುಟ್ಟಿದವರು ಅಂತ" ಅಜ್ಜಿ ಹೇಳಿದರು.

"ಆಮೇಲೆ?"

ಹುಟ್ಟಿದ ಮಕ್ಕಳು ಬೆಳೆದರು. ಎಲ್ಲರೂ ಒಂದೊಂದು ವಿದ್ಯೆಯನ್ನು ಕಲಿತರು. ಬಡಗಿ ವಿದ್ಯೆ ಎಲ್ಯಣ್ಣ ಕಲಿತ. ಕಮ್ಮಾರಿಕೆ ಮಲ್ಲಣ್ಣಗೆ. ಬೀರು ಅಕ್ಕಸಾಲಿ ಆದ. ಬಿಕ್ಕರು ತಾಮ್ರದ ಕೆಲಸ ಕಲಿತ. ನಂದು ಕಲ್ಲುಕೆತ್ತನೆ ಕಲಿತ. ಮುಂದೆ ಅವನನ್ನು ಕಲ್ಕುಡ ಎಂದೇ ಕರೆದರು. ಸಣ್ಣವಳಾದ ಕಲುರುಟಿ ಮನೆ ಕೆಲಸ ಕಲಿತಳು.

" ಓ ಡೆನ್ನ ಡೆನ್ನಾನ  
ಡೆನ್ನಾನ ಡೆನ್ನಾನ  
ಓ ಡೆನ್ನ ಡೆನ್ನಾನ  
ಡೆನ್ನಾನ ಡೆನ್ನಾನ"

"ಅಜ್ಜಿ ಈಗ ಏನು ಹೇಳಿದಿ?"  
"ಇದು ಕತೆ ಅಲ್ಲ. 'ಸಂದಿ' ಹೇಳುವಾಗ ಹೇಳುವ ನುಡಿ."  
ಇದನ್ನು ಭೂತದ 'ಸಂದಿ' ಗೆ ಮಾತ್ರ ಹೇಳುತ್ತಾರಾ?"  
"ಹೌದು"

"ತುಂಬ ದಿನ ಆಯಿತು; ಕೇಳಲೇ ಇಲ್ಲ. ಈಗ ನೆನಪು ಬಂತು. ಭೂತ ಅಂದರೆ ಏನು?" ಹುಡುಗ ಕತೆ ಅಲ್ಲಿಗೆ ಬಿಟ್ಟ; ಭೂತದ ಬಗೆಗೆ ಕೇಳಿದ..

"ನಿನಗೆ ಕತೆ ಬೇಡವೇ?" ಅಜ್ಜಿ ಕೇಳಿದರು.

"ಕತೆಯೂ ಬೇಕು, ಭೂತವೂ ಬೇಕು. "

"ಭೂತಗಳು ಈಶ್ವರನ ಗಣಗಳು" ಅಜ್ಜಿ ಇನ್ನೊಂದು ಕತೆ ಹೇಳಿದರು.

ಹಿಂದೆ ಈ ಭೂಮಿಯೇ ಇರಲಿಲ್ಲ. ಎಲ್ಲಿ ನೋಡಿದರೂ ನೀರೇ ನೀರು. ಆದಿಮಾಯೆ ಭೂಮಿಯನ್ನು ಉಂಟು ಮಾಡಿದಳು. ಬ್ರಹ್ಮ, ಈಶ್ವರ, ವಿಷ್ಣು ಇವಳ ಮಕ್ಕಳು. ಬ್ರಹ್ಮನಿಗೆ ಜನನದ ಕೆಲಸ. ವಿಷ್ಣುವಿಗೆ ಕಾಪಾಡುವ ಕೆಲಸ. ಈಶ್ವರನಿಗೆ ನಾಶ ಮಾಡುವ ಕೆಲಸ. ಹೀಗೆ ಮೂವರಿಗೆ ಕೆಲಸ ಹಂಚಿದಳು. ಈಶ್ವರನು ಒಂದು ಸಾವಿರ ಭೂತಗಳನ್ನು ಹುಟ್ಟಿಸಿದ. ಹಾಗೆ ಈಶ್ವರನ ಮಕ್ಕಳೆ ಭೂತಗಳು.

"ಅಜ್ಜಿ, 'ಸಂದಿ' ಅಂದರೇ?" ಅದು ಭೂತಕೆ ಹೇಳುವ ಹಾಡು. ಅದರೆ ನಾವು ಅದನ್ನು ಹಾಡು ಅಂತ ಹೇಳೆವು. ಬೇಕಾದರೆ 'ಪಾರ್ತನ' ಅಂತ ಹೇಳುವ. ಕೆಲವರು 'ಪಾಡ್ದನ' ಅಂತಲೂ ಹೇಳುವರು. ಅದರಲ್ಲಿ ಭೂತದ ಕತೆ, ಕಾರಣಿಕ ಇರುವುದು. ಆದ್ದರಿಂದ 'ಸಂದಿ' ಬೇರೆ. ಕತೆ ಬೇರೆ.

"ಈಗ ಕಲುರುಟಿ ಭೂತದ ಕತೆ ಹೇಳು."

" ಓ ಡೆನ್ನ ಡೆನ್ನಾನ
ಡೆನ್ನಾನ ಡೆನ್ನಾನ
ಓ ಡೆನ್ನ ಡೆನ್ನಾನ
ಡೆನ್ನಾನ ಡೆನ್ನಾನ"

ನಂದುವನ್ನು ಅವನ ತಾಯಿ ಹೆರುವ ಮೊದಲು. ಆಗ ಸಮ್ಮುವಿಗೆ ಬೇಲೂರು ಕಡೆಯಿಂದ ಕರೆ ಬಂತು. ಬೇಲೂರು ಅರಸ ಓಲೆ ಬರೆದ. ಹಾಗೆ ಸಮ್ಮು ಅಲ್ಲಿಗೆ ಹೋದ. ಅದರಿಂದ ನಂದು ತಂದೆಯನ್ನು ಕಾಣಲೇ ಇಲ್ಲ. ಬೇರೆ ಹುಡುಗರು ಅವನನ್ನು ತಮಾಷೆ ಮಾಡುವರು. "ನಿನ್ನ ತಂದೆ ಯಾರು?"ಎಂದು ಕೇಳುವರು. ನಂದುವಿಗೆ ಬೇಸರ ಆಯಿತು. ಆತ ತಾಯಿಗೆ ಕೇಳಿದ. ತಾಯಿ ಎಲ್ಲ ಹೇಳಿದಳು.

"ಅಜ್ಜಿ ಭೂತವನು ಎಲ್ಲೆಲ್ಲಿ ನಂಬುವರು?" ಹುಡುಗ ಮತ್ತೆ ಕೇಳಿದ.

"ದಕ್ಷಿಣ ಕನ್ನಡ ಜಿಲ್ಲೆ ಹಾಗೂ ಕೇರಳ ರಾಜ್ಯದಲ್ಲಿ"

"ಭೂತಗಳು ಯಾವ ಮಾತು ಆಡುತ್ತವೆ?"

"ತುಳು, ಅರೆಭಾಷೆ, ಕನ್ನಡ, ಮಲಯಾಳ"

"ಭೂತದ ವೇಷ ಯಾರು ಹಾಕುವರು?"

"ಭೂತದ ವೇಷ ಹಾಕುವುದು ಅಂತ ಹೇಳಬಾರದು"

"ಮತ್ತೆ?"

"ಭೂತ ಕಟ್ಟುವದು ಅಂತ"

"ಹಾಂ ಯಾರು ಭೂತ ಕಟ್ಟುವರು".



"ಹೆಚ್ಚಾಗಿ ಅಜಿಲ, ಪರವ, ಪಂಬದ ಜನಗಳು, ಕೆಲವು ಕಡೆ ಮೇರರೂ ಕಟ್ಟುತ್ತಾರೆ. ಕೇರಳದಲ್ಲಿ ಬಣ್ಣರು ಮತ್ತೆ ಮಲವರೂ ಕಟ್ಟುವರು." ಇವರ ಮಾತುಕತೆ ಇನ್ನೊಬ್ಬ ಕೇಳುತ್ತ ಇದ್ದ. ಆತ ಈ ಹುಡುಗನ ಅಣ್ಣ. ಕಾಲೇಜು ಓದುವ ತರುಣ. ಅವನು ಭೂತವನ್ನು ನಂಬದ ಜನ. ಆತ ನಡುವೆ ಬಾಯಿ ಹಾಕಿದ-

"ಕರಿಯ ಜಾತಿಯ ಜನಗಳು ಅಂತ ಹೇಳಿ"

"ಅದನ್ನೂ ಅವನಿಗೆ ಯಾಕೆ ಹೇಳಬೇಕು?"

"ಮತ್ತೆ ಕತೆ ಹೇಳಿದೆ?"

"ಕತೆ ಅವನಿಗೆ ಬೇಕು" ಆತ ಸುಮ್ಮನಾದ. ಹುಡುಗ ಮತ್ತೆ ಕೇಳಿದ-

"ಭೂತ ಕಟ್ಟುವುದು ಹೇಗೆ?"

"ಮೊದಲು ಭೂತಕೆ ಬಣ್ಣ ಬರೆಯುವುದು. ಇದನ್ನು ಅರದಲವರು ಅಂತ ಹೇಳುವರು.

ಈ ಅರದಲವು ಹಳದಿ, ಬಿಳಿ ಕೆಂಪು ಬಣ್ಣಗಳ ಕಲಸು. ಆಮೇಲೆ ಆಭರಣ ತೊಡುವುದು. ತಲೆಗೆ-ತಲೆಪಟ್ಟಿ, ತಲೆಮಣಿ, ತಲೆಪಟ್ಟ, ತಲೆ ಹೂ, ಕೇದಗೆ ಹೂ,



ತಲೆ ಪಟ್ಟಿ



ಮುಂದಲೆ ಬೊಟ್ಟು



ತಲೆ ಹೂ



ತಲೆ ಮಣಿ

ಜಾಲಿಗೂಂಡ.ಹೂ ದಂಡೆ, ತಲೆ ಪುಂಡಾಯ, ಮುಂದಲೆ ತಿಲಕ, ಮುಂದಲೆ ಹೂ ಮೊದಲಾದ ಆಭರಣಗಳು ಇರಬೇಕು.

"ಕಿವಿಗೆ ಕೆಬಿನ, ತೋಳಿಗೆ ದಂಡೆಕಾಜಿ, (ಕೈಬಳೆ) ತಿರಿಪುಂಡಾಯಿ, ಭುಜಪಾಳೆ, ಕಾಲಿಗೆ ಕಾರತಾಳ ಮತ್ತೆ ಗಗ್ಗರ, ಎದೆಗೆ ಎದೆಪಾಳ (ಎದೆಹಾಳೆ) ಮತ್ತೆ 'ತಿಗಲೆ ಸವರಿ' (ಎದೆಯ ಮೇಲೆ ಕಟ್ಟುವ ತೆಂಗಿನ ಗರಿ) ಬೆನ್ನಿಗೆ ದಡ್ಸಲೆ ಜೆರಾಂಕು (ತೆಂಗಿನ ಗರಿಯ ಅಲಂಕಾರ) ಹಾಗೆಯೇ ಬೆರಿಸಬೇರಿ, (ಬೆನ್ನಿಗೆ ಕಟ್ಟುವ ತೆಂಗಿನ ಗರಿಯ ಅಲಂಕಾರ).

ಹೆಣ್ಣುಭೂತಕ್ಕೆ 'ಮೊಲೆಕಟ್ಟು' ಬೇಕು.

"ಮೊಲೆ ಕಟ್ಟು ಎಂದರೆ ಅವನಿಗೆ ಗೊತ್ತಾಗುವುದೇ?"ಕಾಲೇಜು ಹುಡುಗ ಕೇಳಿದ. ಅವನಿಗೆ ಅಜ್ಜಿ ಕೊಟ್ಟ ಉತ್ತರ ನೆನಪು ಇತ್ತು.

"ನೀನು ಸುಮ್ಮನಿರು." ಏನೋ ಹೇಳಿ ಹೋಯಿತು ಅಜ್ಜಿ ನಕ್ಕರು.

"ನೀನು ಹೇಳಜ್ಜಿ" ಹುಡುಗ ಒತ್ತಾಯ ಮಾಡಿದ.

ತಲೆಗೆ ತಿರಿಮುಡಿ ಇಡುತ್ತಾರೆ. ಇದು ತೆಂಗಿನ ಗರಿಯ ಅಲಂಕಾರ. ಹಾಗೆಯೇ ಒಲಿ ಕಿರೀಟ ಇಡುತ್ತಾರೆ. ಇದು ತೆಂಗಿನ ಗರಿಯ ಕಿರೀಟ. ಇಲ್ಲಿಗೆ ಭೂತ ಕಟ್ಟಿ ಆಯಿತು.

"ನಿಮ್ಮ ಕತೆ ಅಲ್ಲೇ ಇದೆ!" ಅಣ್ಣ ಹೇಳಿದ.
"ಹೌದಜ್ಜಿ ಕತೆ ಹೇಳು" ಹುಡುಗ ನೆನಪು ಮಾಡಿದ.
"ನಾನು ಏನು ಹೇಳಿದೆ?" ಅಜ್ಜಿಗೆ ಮರೆತು ಹೋಗಿತ್ತು.
"ನಂದು ಅವನ ತಾಯಿಗೆ ಕೇಳಿದ." ಹುಡುಗ ಹೇಳಿದ.
"ಹಾಂ"

" ಓ ಡೆನ್ನ ಡೆನ್ನಾನ
ಡೆನ್ನಾನ ಡೆನ್ನಾನ
ಓ ಡೆನ್ನಾನ ಡೆನ್ನಾನ
ಡೆನ್ನಾನ ಡೆನ್ನಾನ"

ನಂದುಗೆ ಅವನ ತಂದೆಯ ನೋಡುವ ಆಸೆ. ನಾನು ಬೇಲೂರಿಗೆ ಹೋಗುವೆ ಎಂದು ಹಟ ಹಿಡಿದ. ತಾಯಿ ಬುತ್ತಿ ಕಟ್ಟಿಕೊಟ್ಟಳು. ಆತ ತಂದೆಯನ್ನು ಹುಡುಕಿ ಹೊರಟ. ಹೋಗುತ್ತಾ ಒಂದು ಊರಿಗೆ ಹೋದ. ಆಗ ಅವನಿಗೆ ಹಸಿವೆ ಆಯಿತು. ಅಲ್ಲೇ ಮರದ ಕೆಳಗೆ ಕುಳಿತ. ಬುತ್ತಿ ಬಿಚ್ಚಿದ. ಊಟ ಮಾಡಿದ. ಆಯಾಸ ಅಂತ ಅಲ್ಲೇ ಕುಳಿತ. ಆಗ ಆ ಕಡೆಯಿಂದ ಯಾರೋ ಬಂದರು. ಬಂದವ ಒಬ್ಬ ಗಂಡಸು. ಹುಡುಗ ಅವನ ಕಡೆಗೆ ನೋಡಿದ. ತಾಯಿ ಹೇಳಿದ ರೂಪು ನೆನಪು ಬಂತು. ಆತ ಕೇಳಿದ -

"ನಿನ್ನ ಹೆಸರು ಏನು?"

"ನಂದು"

"ಯಾವ ಊರು?"

"ಕಲ್ಲೆತ ಮಾರೆನಾಡು."

ಗಂಡಸಿನ ಕುತೂಹಲ ಹೆಚ್ಚಿತು. "ಯಾರ ಮಗ"ಎಂದು ಕೇಳಿದ. ನನ್ನ ತಾಯಿ ಇರುವೆದಿ. ತಂದೆ ಸಮ್ಮು ಕಲ್ಕುಡ" ಗಂಡಸು ಬೆರಗಾದ. "ಈಗ ಎಲ್ಲಿಗೆ ಹೊರಟೆ?" ಎಂದ.

"ನನ್ನ ತಂದೆ ಬೇಲೂರಲ್ಲಿ ಇದ್ದಾರೆ ಅಲ್ಲಿಗೆ ಹೊರಟೆ" ಹುಡುಗ ಹೇಳಿದ. "ಮಗ, ನಾನೇ ನಿನ್ನ ಅಪ್ಪ! ಸಮ್ಮು ಕಲ್ಕುಡ ನಾನೇ!!" ನಂದು ತನ್ನ ಕಣ್ಣನ್ನು

ತಾನೇ ನಂಬಲಿಲ್ಲ. ಅವನಿಗೆ ಕನಸು ಕಂಡ ಹಾಗೆ ಆಯಿತು. ತಂದೆ ಮಗನ ಎತ್ತಿ ಮುದ್ದಿಸಿದ. ಅವರು ಆಡಿದ ಮಾತಿಗೆ ಲೆಕ್ಕವೇ ಇಲ್ಲ. ಆಮೇಲೆ ಮಗ ಕೇಳಿದ-



ಗೊಮ್ಮಟನ ಮೂರ್ತಿ

"ಅಪ್ಪ ಇಷ್ಟು ದಿವಸ ಎಲ್ಲೆಲ್ಲಿ ಇದ್ದೆ?"

"ಬೇಲೂರು. ಹಾಗೇ ಬೆಳಗೊಳ"

"ಅಲ್ಲಿ ಏನು ಕೆಲಸ ಮಾಡಿದೆ?"

"ಅರಮನೆ ಮತ್ತು ಗೊಮ್ಮಟನ ಮೂರ್ತಿ" ಅಷ್ಟು ಹೇಳಿದ್ದೇ ತಡ. ಮಗ ತಾನು ಅದನ್ನು ನೋಡಲು ಹಟ ಹಿಡಿದ.

ಸರಿ ಅವರು ಮತ್ತೆ ಬೆಳಗೊಳದ ಕಡೆಗೆ ಹೋದರು. ತಂದೆ ತೋರಿಸುತ್ತ ಬಂದ. ಮಗ ನೋಡಿದ. ಗೊಮ್ಮಟನ ಮೂರ್ತಿಯ ಕೆತ್ತನೆ ನೋಡಿದ. ಮಗ ಆಗ ಹಾಗೆ ಸುಮ್ಮಗೆ ಆದ. ಅಪ್ಪನಿಗೆ ಕುತೂಹಲ.

"ಮಗನೇ, ಏಕೆ ಸುಮ್ಮಗೆ ಆದೆ" ತಂದೆ ಕೇಳಿದ.

"ಅಪ್ಪ ಮೂರ್ತಿಯ ಎಡ ಭಾಗ ನೋಡಿ. ಹಾಗೆ ಬಲವನ್ನೂ ನೋಡಿ. ಒಂದು ನೂಲಿನ ಎಳೆ ಕೊರತೆ ಇದೆ."

ಮಗನ ಉತ್ತರ ತಂದೆಗೆ ಬಹಳ ಬೇಸರ ಆಯಿತು. ಈವರೆಗೆ ಯಾರೂ ತನ್ನನ್ನು ದೂರಿಲ್ಲ. ಈಗ ಮಗನೇ ದೂರಿದ.

ಅರಸನಿಗೆ ಈ ಕೊರತೆ ತಿಳಿದರೆ ಸಾಯಿಸುವ. ಸರಿ, ನಾನಿನ್ನು ಉಳಿಯಬಾರದು. ಹೀಗೆ ತೀರ್ಮಾನ ಮಾಡಿದ. ಚೂರಿ ತೆಗೆದು ಇರಿದು ಕೊಂಡು ಸತ್ತ. ಅಲ್ಲಿಂದ ತಂದೆಯ ಕೆಲಸ ಮಗ ಮುಂದುವರಿಸಿದ.

"ಅಜ್ಜಿ ಭೂತ ಕಟ್ಟುವ ಸಮಯ ಯಾವುದು?"

"ಅಂದರೆ ಎಲ್ಲಿಂದ ಎಲ್ಲಿಯ ತನಕ ಎಂದೋ?"

"ಹೂಂ"

"ದೀಪಾವಳಿಯಿಂದ ಹತ್ತನಾಜೆ ತನಕ"

"ಹತ್ತನಾಜೆ ಎಂದರೆ?"

"ಬೇಷ ಹತ್ತನಾಜೆ"

ಹುಡುಗ ಗೊತ್ತು ಮಾಡಿ ಕೊಳ್ಳದೆ ಹೋದ. ಮತ್ತೆ ಅದನ್ನೇ ಕೇಳಿದ.

"ಅದು ಮೇ ತಿಂಗಳು" ಅಂದ ಕಾಲೇಜು ಹುಡುಗ.

"ಅದೇ ಕಾಲದಲ್ಲಿ ಏಕೆ ಮಾಡುತ್ತಾರೆ?"

"ಉಳಿದ ಆರು ತಿಂಗಳು ಭೂತಗಳು ಇಲ್ಲ."

"ಎಲ್ಲಿಗೆ ಹೋಗುತ್ತವೆ?"

"ಕುಂಭಕರ್ಣನಿಗೆ ಸೌದೆ ಕಡಿಯಲು"

"ಅಂದರೆ?"

"ಕುಂಭಕರ್ಣ ದೊಡ್ಡರಾಕ್ಷಸ. ಅವನನ್ನು ಸುಡಲು ತುಂಬ ಸೌದೆ ಬೇಕು. ಅದಕ್ಕೆ ವರುಷವೂ ಭೂತಗಳು ಹೋಗಬೇಕು."

"ಎಲ್ಲ ಭೂತಗಳೂ ಹೋಗಬೇಕಾ?"

"ಕಲುರುಟಿ ಭೂತ ಬಿಟ್ಟು ಉಳಿದವು"

"ಕಲುರುಟಿ ಏಕೆ ಹೋಗದೆ ಇದ್ದಾಳೆ?"



"ಅದಕ್ಕೆ ಒಂದು ಸಣ್ಣ ಕತೆ ಇದೆ, ಕೇಳು"-

"ಒಮ್ಮೆ ಎಲ್ಲ ಭೂತಗಳೂ ಸೌದೆಗೆ ಹೋದವು. ನಡುವೆ ಗುಳಿಗ ಒಂದು ತಂಟೆ ಮಾಡಿದ. ಕಾಲನ್ನು ಭೂಮಿ ಅಗಲಕ್ಕೆ ಅಗಲಿಸಿ ನಿಂತ. ನನ್ನ ಕಾಲ ಅಡಿಯಲ್ಲಿ ಹೋಗಿ ಅಂದ. ಪಾಪ!ಎಲ್ಲ ಭೂತಗಳು ಹೆದರಿ ಹಾಗೆ ಮಾಡಿದವು. ಕೊನೆಗೆ ಕಲುರುಟಿ ಬಂದಳು. ಆಕೆಗೆ ಇದು ಅವಮಾನ ಅಂತ ಕಂಡಿತು. ಕಾಲು ತೆಗೆಯಲು ಹೇಳಿದಳು. ಗುಳಿಗ ಒಪ್ಪದೆ ಇದ್ದ. ತನ್ನ ಪಂಚ ದೀವಟಿಗೆ ಎತ್ತಿದಳು. ಅದು ಒಂದು ರೀತಿಯ ಉರಿಯುವ ದೊಂದಿ. ಉರಿ ತಡೆಯದೆ ಗುಳಿಗ ದಾರಿ ಬಿಟ್ಟ. ಆದರೂ ಆಕೆ ಅವಮಾನ ಅಂತ ಹೋಗದೆ ಇದ್ದಾಳೆ.

"ಭೂತ ಕಟ್ಟುವುದನ್ನು ಏನೇನು ಹೆಸರಲ್ಲಿ ಕರೆಯುವರು?"



ಕಾಲ ಕೆಳಗೆ ನುಸುಳಿದರು

"ಕೋಲ, ನೇಮ, ಜಾತ್ರೆ, ತಂಬಿಲ, ಜಾಲಾಟ, ಭೂತಾರಾಧನೆ ಅಂತ ಒಟ್ಟಾಗಿ ಹೇಳುತ್ತಾರೆ"

- ಕಾಲೇಜು ಹುಡುಗ ಸೇರಿಸಿದ.

"ಓದಿದವರು ಹಾಗೇ ಹೇಳುವುದು" ಅಜ್ಜಿ ಒಪ್ಪಿಕೊಂಡರು.

"ಕೋಲ ಹೇಗೆ ನಡೆಸುತ್ತಾರೆ?" ಹುಡುಗ ಕೇಳಿದ.

"ನಿನಗೆ ಕತೆ ಬೇಡವೇ?"



ಸಿಂಗದನ

"ಈಗ ಇದನ್ನು ಹೇಳು"

ಮೊದಲು ಗೊನೆ ಕಡಿಯುವುದು. ಒಂದು ಗೊನೆ ಇರುವ ಬಾಳೆ ತರುತ್ತಾರೆ. ಭೂತದ ಗುಡಿಗೆ ಕಟ್ಟುತ್ತಾರೆ. ಹಿರಿಯರು ಸೇರಿ ಕೋಲಕ್ಕೆ ದಿನ ಇಡುವರು. ಗೊನೆ ಕಡಿದು; ಐದು, ಏಳು, ಒಂಬತ್ತು ದಿನದ ನಂತರ ಕೋಲ. ಮೊದಲು'ಬಂಡಾರ' ಬರುವುದು.

"ಅಂದರೆ?"

ಆಯುಧ, ಮೂರ್ತಿ, ಆಭರಣಗಳ ತೆಗೆಯುವ ಕಾರ್ಯ. ಆಗ ವಾದ್ಯ - ವಾಲಗ ಆಗಬೇಕು. ಆಗ ಭೂತದ ಪೂಜಾರಿಗಳು ಬೇಕು. ಅವರು ಭೂತದ ಕತ್ತಿ ಮತ್ತು ಗಂಟೆ ಹಿಡಿಯುವರು.

"ಭೂತದ ಬಂಡಾರ ಎಲ್ಲಿಗೆ ತರುತ್ತಾರೆ?"

"ಅದನ್ನು ಕೊಡಿಯಡಿಗೆ ತರುತ್ತಾರೆ" ಕೊಡಿಯಡಿ, ಅಂಗಳ ಇಲ್ಲವೇ ಗದ್ದೆಯಲ್ಲಿ ಇರಬಹುದು. ಕೋಲ ಮುಗಿವವರೆಗೆ ಬಂಡಾರ ಅಲ್ಲಿಯೇ.

"ಬಂಡಾರ ಅಲ್ಲಿ ಎಲ್ಲಿ ಇರುವುದು?"

"ಬಂಡಾರ ಇಡಲು ಒಂದು ಪೀಠ ಇದೆ. ಅದುವೇ ಸಿಂಗದನ. ಆಮೇಲೆ ಎಣ್ಣೆ ಬೂಳ್ಯ ಆಗುವುದು."

"ಅಂದರೆ ಏನು?"

"ಅದು ಭೂತ ಕಟ್ಟುವವನಿಗೆ ಕೊಡುವ ಒಪ್ಪಿಗೆ. ಐದು ವೀಳ್ಯದೆಲೆ, ಒಂದು ಅಡಿಕೆ, ಎಣ್ಣೆ ಕೊಡುವ ಕ್ರಮ.".

"ಅಪ್ಪಣೆ ಪಡೆದು ಆತ ಮಿಂದು ಬರುವ. ಆಮೇಲೆ ಬಣ್ಣ ಬರೆಯಲು ಕುಳಿತುಕೊಳ್ಳುವ. ಅದುವೇ ಅರದಲ. ಇದು ಮುಗಿದು ಅಲಂಕಾರ. ಕೆಂಪು ಅಂಗಿ ಹಾಕುತ್ತಾರೆ. ಕೆಂಪು ಇಜಾರೆ (ಒಂದು ರೀತಿಯ ಪ್ಯಾಂಟ್) ತೊಡುತ್ತಾರೆ. ಕೊಡಿಯಡಿಗೆ ಬರುತ್ತಾರೆ. ಬಂದು ಗಗ್ಗರ ಕಟ್ಟುವರು ಇದನ್ನೇ ಗಗ್ಗರದೆಚ್ಚಿ ಎಂದು ಕರೆಯುವುದು."



ಅಣಿ

"ಆಮೇಲೆ?"

"ಬೊಂಡೋ ಬಾರಣೆ, ಅಂದರೆ ಎಳನೀರು ಕುಡಿಯುವುದು. ಎಳನೀರು ಕುಡಿದು 'ಅಣಿ' ಕಟ್ಟುತ್ತಾರೆ. ಅಣಿ ಕಟ್ಟಿದ ಭೂತ ಎದ್ದು ನಿಲ್ಲುತ್ತದೆ. ಎದ್ದು ಗಂಟೆ ಜಾಗಟೆ

ಎತ್ತಿಕೊಳ್ಳುತ್ತದೆ. ಅದನ್ನು ಪೂಜಾರಿ ಭೂತಕ್ಕೆ ಕೊಡುತ್ತಾನೆ. ಈಗ 'ಸಂದ್' ಹೇಳುತ್ತಾರೆ. ವಾದ್ಯ - ವಾಲಗ ನುಡಿಸುವರು. ಆಗ ಜನಗಳು ಭೂತಕ್ಕೆ 'ಪೂವರಿ' ಹಾಕುವರು."

"ಹೂ ಮತ್ತೆ ಅಕ್ಕಿ ಅಂತ ಅದನ್ನು ಭೂತದ ಮೇಲೆ ಹಾಕುವರು. ಭೂತ ಕುಣಿಯುವುದು. ಕೊನೆಗೆ ಭೂತದ ಟಿರಿ. ಅಂದರೆ ಬಿಡುವುದು. ಕಟ್ಟಿದ ಭೂತ ಬಿಟ್ಟು ಹೋಗುತ್ತದೆ."

"ಸಂದಿ ಯಾವಾಗ ಹೇಳುತ್ತಾರೆ?"

"ಎಣ್ಣೆ, ಬೂಳ್ಯ, ಅರದಲ ಮತ್ತೆ ಅಣಿ ಕಟ್ಟುವಾಗ"

"ಸಂದಿ ಹೇಳುವಾಗ ವಾದ್ಯ ಇರುವುದೇ?"



ಎದ್ದು ನಿಂತ ಭೂತ

"ಸಂದಿಗೆ ವಾದ್ಯ ಇಲ್ಲ. ತೆಂಬರೆ ನುಡಿಸುವರು. ಅದನ್ನು ಡೆನ್ನು ಡೆನ್ನಾನ ಅಂತ ನುಡಿಸುವರು."



ತಂಬರೆ

"ಅಜ್ಜಿ ಭೂತವನು ಏಕೆ ನಂಬುತ್ತಾರೆ?"

"ಭೂತವನು ನಂಬಿದರೆ ನಮಗೆ ತೊಂದರೆ ಬರುವುದಿಲ್ಲ"

"ನಂಬದೆ ಇದ್ದರೆ?"

"ತೊಂದರೆ ಬರುವುದು."

"ನೀವು ಹಾಗೆ ಈಗಲೇ ಅವನಿಗೆ ಹೇಳಿ. ಅದನ್ನು ಅವನು ನಂಬುತ್ತಾನೆ. ನಿಮ್ಮ ಬೂತ ಅವನಿಗೆ ಅನ್ನ ಕೊಡುತ್ತದಾ"? ಕಾಲೇಜು ಹುಡುಗ ಗದರಿದ.

"ನಾನು ಮತ್ತೆ ಏನು ಹೇಳಲಿ?"

"ಬೇರೆ ಏನು ಬೇಕಾದರೂ ಹೇಳಿ. ಭೂತ ಕಷ್ಟ ಕೊಡುತ್ತದೆ ಎಂದು ಹೇಳಬೇಡಿ. ಈಗ ನಾನು ನಂಬಲಿಲ್ಲ. ನನಗೆ ಭೂತ ತೊಂದರೆ ಕೊಟ್ಟಿದೆಯ?" ಅಂದ.

"ಅದು ನಿನ್ನ ಇಷ್ಟ. ನಂಬಿದರೆ ಉಂಟು. ಇಲ್ಲ ಅಂದರೆ ಇಲ್ಲ, ಆಯಿತಾ?" ಆತ ಸುಮ್ಮನೆ ಇದ್ದ.

"ಅಜ್ಜಿ ಭೂತದ ಕತೆ ನಿಂತು ಹೋಯಿತು" ಹುಡುಗ ಮತ್ತೆ ಕೇಳಿದ.

"ನೀನು ಭೂತ ಕಟ್ಟುವುದು ಹೇಗೆ" ಅಂದೆ, ಅದಕ್ಕೆ ಕತೆ ಅಲ್ಲೇ ನಿಂತಿತು."

"ಹಾಲಿಗೆ ಬಂದವ ಎಮ್ಮೆ ಬೆಲೆ ಕೇಳಿದ" ಕಾಲೇಜು ಹುಡುಗ ಮತ್ತೆ ಸೇರಿಸಿದ.

"ನಾನು ಎಲ್ಲಿಗೆ ನಿಲ್ಲಿಸಿದ್ದೆ?" ಅಜ್ಜಿ ಮರೆತು ಕೇಳಿದರು.

"ನಂದು ತಂದೆಯ ಕೆಲಸ ಕಲಿತ " ಹುಡುಗ ಉತ್ತರ ಕೊಟ್ಟ.

" ಓ ಡೆನ್ನು ಡೆನ್ನಾನ
ಡೆನ್ನೆನ ಡೆನ್ನಾನ
ಓ ಡೆನ್ನಾ ಡೆನ್ನಾ
ಡೆನ್ನಾನ ಡೆನ್ನಾನ"

"ನಂದು ಮನೆಗೆ ಬಾರದೆ ಬಹಳ ವರುಷ ಆಯಿತು. ಅವನ ತಂಗಿಗೆ ಬೇಸರ. ಅಣ್ಣನ ನೋಡಲು ಹಟ ಹಿಡಿದಳು. ತಾಯಿಗೆ ಹೇಳಿ ಸಿಂಗಾರ ಆಗಿ ಹೊರಟಳು.

ಅವಳು ಮೊದಲು ಬೇಲೂರಿಗೆ ಬಂದಳು. ಅಣ್ಣ ಬೆಳಗೊಳಕ್ಕೆ ಹೋಗಿರುವುದು ತಿಳಿಯಿತು. ಬೆಳಗೊಳಕ್ಕೆ ಹೋದಳು. ಏನ್ರಾಡಿಗೆ ಹೋಗಿರುವುದು ತಿಳಿಯಿತು. ಏನ್ರಾಡಿಗೆ ಹೋದಳು. ನಗರಕ್ಕೆ ಹೋಗಿರುವುದು ತಿಳಿಯಿತು. ನಗರಕ್ಕೆ ಹೋದಳು. ಕೊಲ್ಲೂರಿಗೆ

ಹೋಗಿರುವುದು ತಿಳಿಯಿತು. ಕೊಲ್ಲೂರಿಗೆ ಬಂದಳು. ಪೆದ್ದೂರಿಗೆ ಹೋಗಿರುವುದು ತಿಳಿಯಿತು. ಪೆದ್ದೂರಿಗೆ ಬಂದಳು. ಕಾರ್ಕಳಕ್ಕೆ ಹೋಗಿರುವುದು ತಿಳಿಯಿತು. ಕಾರ್ಕಳಕ್ಕೆ ಬಂದಳು. ವೇಣೂರಿಗೆ ಹೋಗಿರುವುದು ತಿಳಿಯಿತು. ವೇಣೂರಿಗೆ ಓಡಿಕೊಂಡು ಬಂದಳು.

ಅವಳಿಗೆ ಅಣ್ಣನ ಗುರುತು ಸಿಗಲಿಲ್ಲ. ಅವನ ಎಡ ಕೈ ಮತ್ತು ಬಲ ಕಾಲು ತುಂಡು! ಆದರೂ ಆತ ಮೂರ್ತಿ ಕೆತ್ತುತ್ತಾ ಇದ್ದ. ಅವಳಿಗೆ ಅಳು ಬಂತು. ಅಣ್ಣನಿಗೆ ಸಂಗತಿ ಏನೆಂದು ಕೇಳಿದಳು.

"ತಂಗಿ, ನಾನು ಕೊಲ್ಲೂರ ದೇವಾಲಯ ಕಟ್ಟಿದೆ. ಮೂರ್ತಿ ನಿಲ್ಲಿಸಿದೆ. ಕಾರ್ಕಳದ ಅರಸ ಕರೆಸಿದ. ಗೊಮ್ಮಟ ಮೂರ್ತಿ ಮಾಡಲು ಹೇಳಿದ. ಅದಕ್ಕೆ ಅವನು ನನಗೆ ಬಹುಮಾನ ಕೊಟ್ಟ.!"

"ಅಂದರೆ"

"ಇಂತಹ ಗೊಮ್ಮಟ ಬೇರೆ ಇರಬಾರದು. ಇನ್ನು ನಾನು ಇಂತಹ ವಿಗ್ರಹ ಮಾಡಬಾರದು. ಬೇರೆ ಎಲ್ಲಿಗೂ ಹೋಗಬಾರದು. ಅದಕ್ಕೆ ಕೈ ಕಾಲು ಕಡಿಸಿದ. ಆದರೂ ನಾನು ಇಲ್ಲಿಗೆ ಬಂದೆ."

ಇದನ್ನು ಕೇಳಿ ತಂಗಿಗೆ ಸಿಟ್ಟು ಬಂತು. "ಅರಸ ನಮಗೆ ಅನ್ಯಾಯ ಮಾಡಿದ. ನಾವು ಬಿಡಬಾರದು" ಅಂದಳು. ಅವಳು ಕಾರ್ಕಳದ ಅರಸನಿಗೆ ಶಾಪ ಕೊಟ್ಟಳು. ಇಬ್ಬರೂ ಮಾಯ ಆದರು. ಹಾಗೆ ಮಾಯ ಆಗಿ ಭೂತ ಆದರು. ಕಲ್ಕುಡ ಗಂಡಸರ ಮೈ ಸೇರಿದ. ಕಲುರುಟಿ ಹೆಂಗಸರ ಮೈ ಸೇರಿದಳು. ಜನಗಳಿಗೆ ಹುಚ್ಚು ಹಿಡಿಸಿದರು. ಆಮೇಲೆ ಕಾರ್ಕಳದ ಅರಮನೆ ಸುಟ್ಟರು.

"ಅಜ್ಜಿ, ಇಲ್ಲಿ ಸತ್ಯ ಇದೆ" - ಕಾಲೇಜು ತರುಣ ಹೇಳಿದ.

"ಏನದು?" ಅಜ್ಜಿ ಕೇಳಿದರು.



ಅರಮನೆ ಸುಟ್ಟರು

"ಗೊಮ್ಮಟ ಮೂರ್ತಿ ಅರಸ ಮಾಡಿಸಿದ. ಅದನ್ನು ಎಲ್ಲರೂ ಹೇಳುತ್ತಾರೆ. ಅದರ ಬರವಣಿಗೆ ಇದೆ; ಆದರೆ ಮೂರ್ತಿ ಮಾಡಿದ ಶಿಲ್ಪಿಯ ಕತೆ? ಯಾರೂ ಬರೆಯುವುದು ಇಲ್ಲ. ಅವನ ಕತೆ ನೀವೇ ಹೇಳಬೇಕು"

"ಹಾಗೆ ದಾರಿಗೆ ಬಾ. ಅಕ್ಷರ ಬಂದರೆ ಎಲ್ಲ ಬಂತೆ? ಓದು ಬರುವವರು ಹೇಳದೆ ಇದ್ದಾರು. ಆದರೆ ಓದು ಬರದವರು ಹೇಳುವರು. ಅರಸ ಓದಿದವ. ಆತ ತನ್ನ ಬಗೆಗೆ ಬರೆಸಿದ. ಶಿಲ್ಪಿ ಓದದವ. ನಾವು ಅವನ ಬಗ್ಗೆ ಹಾಡು ಹಾಡಿದೆವು. ಹಾಡಲು ಓದು ಬೇಕೆ?"

"ಎಲ್ಲಾ ಭೂತಗಳ ಕತೆಯೂ ಹಾಗೆ. ಮೊದಲು ನಮ್ಮ ಹಾಗೆ ಮನುಷ್ಯರು. ಆಮೇಲೆ ಯಾರೋ ಅನ್ಯಾಯ ಮಾಡುತ್ತಾರೆ. ಮಾಯ ಆಗಿ ಭೂತ ಆಗುತ್ತಾರೆ. ಅಲ್ಲವೇ ಅಜ್ಜಿ?" ತರುಣ ಹಾಗೆ ಹೇಳಿದ.

"ಹೌದು"

"ಅಜ್ಜಿ, ಎಷ್ಟು ರೀತಿಯ ಭೂತಗಳು ಇವೆ?" ಕತೆ ಕೇಳುವ ಹುಡುಗ ಕೇಳಿದ.

"ಸೀಮೆ ಭೂತ ಇದೆ. ಮಾಗಣೆ ಭೂತ ಇದೆ. ಊರು ಭೂತ ಇದೆ. ಕುಟುಂಬ ಭೂತ ಇದೆ.

"ಅವೆಲ್ಲ ಏನು ಅಜ್ಜಿ?"

"ಹಲವು ಕುಲಗಳು ಸೇರಿ ಒಂದು ಊರು. ಹಲವು ಊರು ಸೇರಿ ಒಂದು ಗ್ರಾಮ. ಒಂದು ಗ್ರಾಮದಲ್ಲಿ ನಾಲ್ಕು ಗುತ್ತು ಇರುವದು. ಹಲವು ಗ್ರಾಮ ಸೇರಿ ಒಂದು ಮಾಗಣೆ, ಹಲವು ಮಾಗಣೆ ಸೇರಿ ಒಂದು ಸೀಮೆ. ಹಲವು ಸೀಮೆ ಸೇರಿದರೆ ಒಂದು ದೇಶ.

ಸೀಮೆಯ ಭೂತಕ್ಕೆ ಸೀಮೆಯ ಕಾರುಬಾರು. ಈ ಭೂತಗಳ ಹೇಳಿಕೆಗೆ ಉಳಿದ ಭೂತಗಳು. ಮಾಗಣೆ ಭೂತವು ಮಾಗಣೆಗೆ ಸೇರಿದ್ದು. ಗುತ್ತಿನ ಭೂತವು ಗುತ್ತಿನ ಮನೆಗೆ. ಗ್ರಾಮದ ಭೂತವು ಗ್ರಾಮಕ್ಕೆ. ಕುಟುಂಬದ ಭೂತವು ಕುಟುಂಬಕ್ಕೆ. ಕಲುರುಟಿ ಭೂತ, ಕುಟುಂಬದ ಭೂತ.

"ಭೂತಗಳು ಎಷ್ಟಿವೆ ಅಜ್ಜಿ!"

"ಆಗಲೇ ಹೇಳಿದೆ - ಒಂದು ಸಾವಿರ ಅಂತ."

"ಮುನ್ನೂರ ಅರವತ್ತು ಇವೆ "ಅಂತ ಬರವಣಿಗೆ" ಕಾಲೇಜು ಹುಡುಗ ಹೇಳಿದ.

"ಅದು ನನಗೆ ಗೊತ್ತಿಲ್ಲ, ನಮ್ಮ ಹಿರಿಯರು ಹೇಳಿದ್ದು ಅಷ್ಟು" ಅಜ್ಜಿ ಹೇಳಿದರು. ಆತ ಸುಮ್ಮನೆ ಇದ್ದ.

"ಎಲ್ಲಾ ಭೂತಗಳಿಗೂ ಸಂದಿ ಇದೆಯೇ?" ಹುಡುಗ ಕೇಳಿದ.

"ಹೆಚ್ಚಿನ ಭೂತಗಳಿಗೆ ಇದೆ"

"ಬೇರೆ ಧರ್ಮದ ಜನಗಳೂ ಭೂತವನ್ನು ನಂಬುವರೆ?"

"ಹೌದು"

"ಯಾವ ಭೂತವನು ನಂಬುವರು?"

"ಅಲಿ ಭೂತವನು"

"ಅದನ್ನು ಎಲ್ಲರೂ ನಂಬುವರೇ?"

"ಹೌದು. ಅದನ್ನು ಎಲ್ಲರೂ ನಂಬುವರು."

"ಅಜ್ಜಿ ಉಳಿದ ಕತೆ ಹೇಳು."

" ಓ ಡೆನ್ನ ಡೆನ್ನಾನ
ಡೆನ್ನಾನ ಡೆನ್ನಾನ
ಓ ಡೆನ್ನ ಡೆನ್ನಾನ
ಡೆನ್ನಾನ ಡೆನ್ನಾನ"

ಅಷ್ಟು ಹೇಳಿದ್ದೇ ತಡ. ಒಳಗೆ ಕಿರುಚು ಕೇಳಿತು. ಒಳಗೆ ಅಜ್ಜಿಯ ಮಗಳು ಇದ್ದಳು. ಅವಳು ಈ ಮಕ್ಕಳ ತಾಯಿ. ಅಜ್ಜಿ ಆಲೋಚನೆ ಮಾಡಿದರು. ಕಲುರುಟಿ 'ಸಂದಿ' ಹೇಳಿದರೆ ಹೀಗೆ. ಕೆಲವು ಹೆಂಗಸರಿಗೆ ಭೂತ ಮೈ ಸೇರುತ್ತದೆ. ಈಗ ಮಗಳಿಗೆ ಮೈ ಸೇರಿದೆ. ಒಳಗೆ ಕಿರಿಚಾಟ ಕೇಳುತ್ತಲೇ ಇದೆ. ಅಬ್ಬರಕ್ಕೆ ಹುಡುಗ ಅಜ್ಜಿಯಸೆರಗು ಸೇರಿದ. ಅಜ್ಜಿ ಎದ್ದರು. ಅವರು ಎದ್ದರೆ ಹುಡುಗನಿಗೆ ಭಯ. ಅಜ್ಜಿ ಬಿಟ್ಟರೂ ಭಯ. ಜತೆಗೆ ಒಳಗೆ ಹೋದರೂ ಭಯ. ಆತ ಅಣ್ಣನ ಬಳಿಗೆ ಹೋದ.

"ಯಾರು ಧರ್ಮ ದೇವತೆಯೇ?" ಅಜ್ಜಿ ಕೇಳಿದರು.

"ಹೌದು" ಭೂತ ಹೇಳಿತು.

"ಏಕೆ ಬರ ಮಾಡಿದೆ?" ಭೂತ ಗದರಿಸಿತು.

"ನಮ್ಮದು ತಪ್ಪಾಯಿತು"

"ಸಮಯ ಅಲ್ಲದ ಸಮಯ ಕರೆದಿರಿ!"

"ಹೌದು ತಪ್ಪಾಯಿತು"

"ತಪ್ಪಿಗೆ ಕಾಣಿಕೆ ಹಾಕಬೇಕು."

"ಆಯಿತು"

"ಕಳೆದ ವರುಷ ನನಗೆ ಕೋಲ ಕೊಟ್ಟಿಲ್ಲ."

"ಈ ವರುಷ ಕೊಡುತ್ತೇನೆ."

"ಖಂಡಿತವಾ?"



ಭೂತಾರಾಧನೆಯಲ್ಲಿ ಉಪಯೋಗಿಸುವ ವಾದ್ಯಗಳು

(ಕೃಪೆ: ಭೂತಾರಾಧನೆ – ಜಾನಪದೀಯ ಅಧ್ಯಯನ)

"ಖಂಡಿತ."

"ಸಂತೋಷ ಆಯಿತು"

"ದೈವಚಿತ್ತ"

"ನೀರು, ನೀರು"

ಅಜ್ಜಿ ನೀರು ಕೊಟ್ಟರು. ನಿಧಾನಕ್ಕೆ ಕಿರಿಚು ನಿಂತಿತು. ಅವರು ಮತ್ತೆ ಹೊರಗೆ ಬಂದರು.

ಹುಡುಗ ಇನ್ನೂ ನಡುಗಿ ಇದ್ದ.

"ನಿನಗೆ ಕತೆ ಹೇಳಿ ಇಷ್ಟು ಆಯಿತು" - ಅಜ್ಜಿ ಹೇಳಿದರು.

"ಅವನ ಕತೆಯ ಹುಚ್ಚು ಇನ್ನಾದರೂ ಹೋಗಬೇಕು" ಅಣ್ಣ ಹೇಳಿದ.

"ಏಳಿ ತುಂಬಾ ಹೊತ್ತು ಆಯಿತು. ಊಟ ಮಾಡಿ ಮಲಗುವ."

ಅವರು ಎದ್ದರು. ಒಳಗೆ ಪಾತ್ರೆ ಸದ್ದು ಕೇಳಿ ಬಂತು. ■

ಕನ್ನಡ ವಿಶ್ವವಿದ್ಯಾಲಯ ... ವರೆಗೆ ಉತ್ತಮ
ಹಾಗೂ ಉಪಯುಕ್ತ ... ಪುಸ್ತಕ ರಚನಾ
ವಿಭಾಗ'ವನ್ನು ತೆರೆದಿ ... ಪುಸ್ತಕ ರಚನೆ
ಮಾಡಬೇಕೆಂದು ಚಿಂತಿ ... ವಸಾಕ್ಷರರಿಗಾಗಿ
ಪುಸ್ತಕ ಬರೆಸುವ ತ ... ವಹಿಸಿಕೊಟ್ಟರು.
ವಿಶ್ವವಿದ್ಯಾಲಯವು ಈ ... ತ ಲೇಖಕರನ್ನು,
ಭಾಷಾತಜ್ಞರನ್ನು, ಶಿಕ್ಷ ... ರ ಅಭಿಪ್ರಾಯ,
ಸಲಹೆ, ಸಹಕಾರಗಳನ ... ದ್ರಣ ವಿನ್ಯಾಸ,
ಚಿತ್ರಗಳ ಮಹತ್ವ, ಸ ... ಸಲ ಚರ್ಚಿಸಿ
ಯೋಜನೆಯನ್ನು ಅನ ...



ನವಸಾಕ್ಷರರಿಗಾಗಿ ಕ ... ಪ್ರಕಟವಾಗಿರುವ
ಪುಸ್ತಕಗಳನ್ನೆಲ್ಲ ... ಭಾಷಾತಜ್ಞರಿಂದ
ಪರಿಶೀಲಿಸಲಾಯಿತು. ... ಂಡು ಅವರಿಗೆ
ಕಮ್ಮಟಗಳನ್ನು ನಡೆ ... ಆಯ್ದ ಜಿಲ್ಲೆ,
ತಾಲೂಕುಗಳಿಗೆ ಕಳು ... ವರಿಂದ ಅದರ
ಗುಣದೋಷಗಳ ಬಗ್ಗೆ ... ಶ್ವವಿದ್ಯಾಲಯದ
ಗಣಕಯಂತ್ರದಲ್ಲಿ ... ಯಕರು ನೀಡಿದ್ದ
ಮಾಹಿತಿಗಳನ್ನೆಲ್ಲ ... ವಾಗಿ ವಿಷಯದ
ಆದ್ಯತೆಗಳನ್ನು ನಿರ್ಧರಿಸಿಕೊಂಡು ಪುಸ್ತಕ ರಚನೆಗೆ ತೊಡಗಲಾಯಿತು; ಪ್ರಖ್ಯಾತ ಲೇಖಕರು ನಮ್ಮ ವಿಶ್ವವಿದ್ಯಾಲಯದ ಪ್ರಾಧ್ಯಾಪಕರ ಜೊತೆ ಚರ್ಚಿಸಿ ತಮ್ಮ ಹಸ್ತಪ್ರತಿಗಳಿಗೆ ಅಂತಿಮ ರೂಪ ಕೊಟ್ಟರು. ಕಲಾವಿದರು ವಿಷಯಗಳಿಗೊಪ್ಪುವ ಚಿತ್ರಗಳನ್ನು ಬರೆದುಕೊಟ್ಟರು. ಹೀಗೆ ಸಿದ್ಧಗೊಂಡ ಹಸ್ತಪ್ರತಿಗಳನ್ನು ನವಸಾಕ್ಷರರ ಬಳಿ ಕೊಂಡೊಯ್ದು ಅವರ ಮುಂದೆ ಪಠಿಸಿ ನಂತರ ಅವರ ಅಭಿಪ್ರಾಯ, ಪ್ರತಿಕ್ರಿಯೆಗಳನ್ನು ಅಳವಡಿಸಿ ಹಸ್ತಪ್ರತಿಯನ್ನು ಅಂತಿಮಗೊಳಿಸಲಾಯಿತು.

---

ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿ ಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು

---